

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1731 (1999)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ವಿಷಯ : ರಾಜ್ಯದಲ್ಲಿ ಮತ್ಸ್ಯಾಹಾರವನ್ನು ಜನಪ್ರಿಯಗೊಳಿಸಿ, ವಿಸ್ತರಿಸುವ ಬಗ್ಗೆ

(ಅ) ರಾಜ್ಯದಲ್ಲಿ ಮೀನುಗಾರಿಕಾ ವಲಯವನ್ನು ಅಭಿವೃದ್ಧಿಗೊಳಿಸುವ ಹಾಗೂ ಮತ್ಸ್ಯಾಹಾರವನ್ನು ಜನಪ್ರಿಯಗೊಳಿಸಲು ಮೀನುಗಾರಿಕೆ ಅಭಿವೃದ್ಧಿ ನಿಗಮವು ಹಮ್ಮಿಕೊಂಡಿರುವ ಕ್ರಿಯಾ ಯೋಜನೆಗಳು ಯಾವುವು ;

(ಆ) ಕಳೆದ ಮೂರು ವರ್ಷಗಳಲ್ಲಿ ಎಷ್ಟು ಜನ ಫಲಾನುಭವಿಗಳಿಗೆ ನಿಗಮದ ಯೋಜನೆಯ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಲಾಗಿದೆ ;

(ಇ) ಮೀನುಗಾರಿಕಾ ವಲಯವನ್ನು ಅಭಿವೃದ್ಧಿಪಡಿಸಲು ಸರ್ಕಾರ ಮೀಸಲಿಟ್ಟಿರುವ ಅನುದಾನ ಎಷ್ಟು ;

(ಈ) ಮಹಾನಗರ ಪ್ರದೇಶಗಳಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡಿರುವ ನಿಗಮದ ಮತ್ಸ್ಯದರ್ಶಿನಿ ಹೋಟೆಲ್‌ಗಳನ್ನು ಬೇಡಿಕೆ ಇರುವ ಜಿಲ್ಲಾ ಕೇಂದ್ರಗಳಲ್ಲಿ ಪ್ರಾರಂಭಿಸುವ ಬಗೆಗಿನ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ;

(ಉ) ಇದ್ದಲ್ಲಿ, ನಿಗಮದ ಮೂಲಕ ಮತ್ಸ್ಯೋತ್ಪನ್ನಗಳನ್ನು ಜನಪ್ರಿಯಗೊಳಿಸುವ ಹಾಗೂ ಆಸಕ್ತರಿಗೆ ಉದ್ಯೋಗ ಕಲ್ಪಿಸಿಕೊಡುವಲ್ಲಿ ನೆರವಾಗುವ ಸರಳ ಯೋಜನೆಗಳಾವುವು ? (ವಿವರ ನೀಡುವುದು)